# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 167
ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎಸ್. ಎಲ್ ಬೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 03.03.2020
ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ 3 ವರ್ಷಗಳಿಂದ ಇಲ್ಲಿಯವರೆಗೆ ರಾಜ್ಯದಲ್ಲಿ ಹೊಸದಾಗಿ ಮಂಜೂರಾಗಿರುವ ನ್ಯಾಯಬೆಲೆ ಅಂಗಡಿಗಳ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಹೊಸದಾಗಿ 580 ನ್ಯಾಯಬೆಲೆ ಅಂಗಡಿಗಳನ್ನು ಮಂಜೂರು ಮಾಡಲಾಗಿದೆ. |
| ಆ | ಮಂಜೂರಾದ ನ್ಯಾಯಬೆಲೆ ಅಂಗಡಿಗಳಲ್ಲಿ ಪ್ರಾರಂಭವಾದ ಅಂಗಡಿಗಳ ಸಂಖ್ಯೆ ಎಷ್ಟು; ಪ್ರಾರಂಭವಾಗದಿದ್ದಲ್ಲಿ ಕಾರಣಗಳೇನು; | ಹೊಸದಾಗಿ ಹಂಚಿಕೆ ಮಾಡಲಾದ 580 ನ್ಯಾಯಬೆಲೆ ಅಂಗಡಿಗಳಲ್ಲಿ 525 ನ್ಯಾಯಬೆಲೆ ಅಂಗಡಿಗಳು ಕಾರ್ಯನಿರ್ವಹಿಸುತ್ತಿವೆ. ಇನ್ನುಳಿದ 55 ನ್ಯಾಯಬೆಲೆ ಅಂಗಡಿಗಳು ಈ ಕೆಳಕಂಡ ಕಾರಣಗಳಿಂದ ಪ್ರಾರಂಭವಾಗಿರುವುದಿಲ್ಲ.<br>1. ಮಂಜೂರಾತಿಗೆ ಸಂಬಧಿಸಿದಂತೆ ಪ್ರಕರಣಗಳು ನ್ಯಾಯಾಲಯದಲ್ಲಿ ಬಾಕಿ ಇರುತ್ತವೆ.<br>2. ಇ-ಕೆವೈಸಿ ಪ್ರಕ್ರಿಯೆ ಪೂರ್ಣಗೊಂಡ ನಂತರ ಪಡಿತರ ಚೀಟಿಗಳನ್ನು ಹೊಸ ನ್ಯಾಯಬೆಲೆ ಅಂಗಡಿಗಳಿಗೆ ಹಂಚಿಕೆ ಮಾಡಲಾಗುವುದು. |
| ಇ | ನ್ಯಾಯಬೆಲೆ ಅಂಗಡಿ ತೆರೆಯಲು ಮಾನದಂಡ/ನಿಯಮಗಳೇನು? | ಹೊಸದಾಗಿ ನ್ಯಾಯ ಬೆಲೆ ಅಂಗಡಿಗಳಿಗೆ ಅರ್ಜಿ ಸಲ್ಲಿಸಲು ಕರ್ನಾಟಕ ಅಗತ್ಯ ವಸ್ತುಗಳ ಕಾಯ್ದೆ (ಸಾವಿಪ) ನಿಯಂತ್ರಣ ತಿದ್ದುಪಡಿ ಆದೇಶ ದಿನಾಂಕ:21.05.2018 ರಂತೆ ಈ ಕೆಳಕಂಡಂತೆ ಪ್ರಾಧಾನ್ಯತೆ ನೀಡಲಾಗಿರುತ್ತದೆ.<br>ಎ) ಸರ್ಕಾರದ ನಿಗಮಗಳು/ಗ್ರಾಮಪಂಚಾಯಿತಿ/ಸ್ಥಳೀಯ ನಗರ ಸಂಸ್ಥೆಗಳು<br>ಬಿ) <u>ಸಹಕಾರ ಸಂಘಗಳು:</u><br>1. ಟಿಎಪಿಸಿಎಂಎಸ್/ಕೋ-ಆಪರೇಟಿವ್ ಮಾರ್ಕೆಟಿಂಗ್ ಸೊಸೈಟಿಗಳು<br>2. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು/ಪಿಎಸ್.ಎಸ್.ಎನ್<br>3. ಹಾಫ್ ಕಾಮ್ಸ್<br>4. ಅಧಿಕೃತ ನೋಂದಣಿಯಾದ ಸಹಕಾರ ಸಂಘಗಳು<br>5. ಅಧಿಕೃತ ನೋಂದಣಿಯಾದ ಪ್ರಾಥಮಿಕ ಬಳಕೆದಾರರ |

| | | |
|---|---|---|
| | | ಸಹಕಾರ ಸಂಘಗಳು<br>6. ನೋಂದಣಿಯಾದ ಆದಿವಾಸಿ ವಿವಿದ್ದೋದ್ದೇಶ ಸಹಕಾರ ಸಂಘಗಳು<br>7. ನೋಂದಣಿಯಾದ ನೇಕಾರರ ಸಹಕಾರ ಸಂಘಗಳು<br>8. ನೋಂದಣಿಯಾದ ಮಹಿಳಾ ವಿವಿದ್ದೋದ್ದೇಶ ಸಹಕಾರ ಸಂಘಗಳು<br>9. ನೋಂದಣಿಯಾದ ವಿವಿದ್ದೋದ್ದೇಶ ಸಹಕಾರ ಸಂಘಗಳು<br>10. ಅಂಗವಿಕಲರ ಕಲ್ಯಾಣ ಸಹಕಾರ ಸಂಘಗಳು<br>11. ಸಹಕಾರ ಸಂಘಗಳ ವತಿಯಿಂದ ನಡೆಸಲಾಗುವ ಬ್ಯಾಂಕ್ ಅಥವಾ ಕೋ-ಆಪರೇಟಿವ್ ಸೊಸೈಟಿಗಳು<br><br>ಸಿ) ಖಾಸಗಿ-ವಿಕಲಚೇತನರ ವರ್ಗಗಳಿಗೆ (Bench Mark Disabily) ಪ್ರಾರಂಭಿಕವಾಗಿ 400 ನ್ಯಾಯಬೆಲೆ ಅಂಗಡಿಗಳು ಮತ್ತು ಮಂಗಳಮುಖಿಯರ ವರ್ಗ (ಪ್ರಾರಂಭಿಕವಾಗಿ 30 ನ್ಯಾಯಬೆಲೆ ಅಂಗಡಿಗಳು)<br>ಮೇಲ್ಕಂಡ ಸಹಕಾರ ಸಂಘಗಳ ಗುಣಮಟ್ಟವನ್ನು ಅವರಿಗೆ ನೀಡಲಾಗಿರುವ ಎಬಿ ಮತ್ತು ಸಿ ಶ್ರೇಣಿಯ ಆಡಿಟ್ ವರದಿಯನ್ನು ಪರಿಗಣಿಸಲಾಗುವುದು ಮತ್ತು ಸದರಿ ಸಹಕಾರ ಸಂಘಗಳು 3 ವರ್ಷಗಳಿಗಿಂತ ಹಿಂದಿನವುಗಳಾಗಿರಬೇಕು ಹಾಗೂ ಕಳೆದ 2 ವರ್ಷಗಳಿಂದ ನಿರಂತರವಾಗಿ ರೂ.200000/- ದಷ್ಟು ಮೊತ್ತದ ಬ್ಯಾಂಕ್ ಬ್ಯಾಲೆನ್ಸ್ ಹೊಂದಿರಬೇಕು. |
| | | ಆದೇಶದ ಕಂಡಿಕೆ (5)(ಬಿ) ರನ್ವಯ2 ತಿಂಗಳ ಪಡಿತರ ಹಂಚಿಕೆಯ ಆಹಾರಧಾನ್ಯ ಪ್ರಮಾಣವನ್ನು ಶೇಖರಿಸಿಡಲು ಸಾಕಷ್ಟು ಸಂಗ್ರಹಣಾ ಸಾಮರ್ಥ್ಯದ ಮಳಿಗೆ ಜಾಗವನ್ನು ಕೂಡ ಹೊಂದಿರಬೇಕು. |

**ಆನಾಸ 11 ಆನಾಸ 2020 (ಇ-ಆಫೀಸ್)**

(ಕೆ.ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.